<u>ಕರ್ನಾಟಕ ವಿಧಾನ ಪರಿಷತ್ತು</u>

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 1075 (1233)
**ಸದಸ್ಯರ ಹೆಸರು** : ಶ್ರೀ ಎಸ್.ರವಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
**ಉತ್ತರಿಸುವ ದಿನಾಂಕ** : 17/03/2020.
**ಉತ್ತರಿಸಬೇಕಾದವರು** : ನಗರಾಭಿವೃದ್ಧಿ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರೆವಿನ್ಯೂ ನಿವೇಶನಗಳನ್ನು ಅಕ್ರಮ-ಸಕ್ರಮ ಖಾತೆ ಯೋಜನೆಯಡಿ ನಗರ ಪ್ರದೇಶದಲ್ಲಿ ಸಕ್ರಮಗೊಳಿಸಲು ಉದ್ದೇಶಿಸಿರುವ ಯೋಜನೆ ಯಾವ ಹಂತದಲ್ಲಿದೆ ; (ವಿವರ ನೀಡುವುದು) | ಸ್ಥಳೀಯ ಯೋಜನಾ ಪ್ರದೇಶ ಘೋಷಣೆಯಾದ ಪ್ರದೇಶಗಳಲ್ಲಿ ಬಂದಿರುವ ಅನಧಿಕೃತ ಬೆಳವಣಿಗೆಗಳನ್ನು ಸಕ್ರಮಗೊಳಿಸುವ ಸಂಬಂಧವಾಗಿ ಸರ್ಕಾರವು ಅಧಿಸೂಚನೆ ಸಂಖ್ಯೆ:ನಅಇ 556 ಮೈಅಪ್ರಾ 2013 (1), ದಿನಾಂಕ: 28-05-2014ರಲ್ಲಿ ಅಕ್ರಮ-ಸಕ್ರಮ ನಿಯಮಗಳನ್ನು ಜಾರಿಗೆ ತಂದಿರುತ್ತದೆ. ಸದರಿ ನಿಯಮಗಳಿಗೆ ಘನ ಸರ್ವೋಚ್ಚ ನ್ಯಾಯಾಲಯವು ದಿನಾಂಕ:13-01-2017ರ ಆದೇಶದಲ್ಲಿ, ದಿನಾಂಕ:28-05-2014 ರಂದು ಸರ್ಕಾರವು ಹೊರಡಿಸಿರುವ ಅಕ್ರಮ-ಸಕ್ರಮ ನಿಯಮಗಳಡಿ ಸ್ವೀಕರಿಸಲಾಗುವ ಅರ್ಜಿಗಳನ್ನು ಪರಿಶೀಲಿಸದಂತೆ ಹಾಗೂ ಕರ್ನಾಟಕ ಉಚ್ಚನ್ಯಾಯಾಲಯವು ದಿನಾಂಕ 19-03-2015 ರಂದು ನೀಡಿರುವ ಮಧ್ಯಂತರ ತಡೆಯಾಜ್ಞೆಯನ್ನು ಮುಂದಿನ ತೀರ್ಪಿನವರೆಗೂ ಮುಂದುವರೆಸುವಂತೆ ಆದೇಶ ನೀಡಿರುತ್ತದೆ. |
| ಆ) | ಈಗಾಗಲೇ ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿ ರೆವಿನ್ಯೂ ನಿವೇಶನಗಳಲ್ಲಿ ಕಟ್ಟಡಗಳನ್ನು ನಿರ್ಮಿಸಿರುವುದನ್ನು ಸಮೀಕ್ಷೆ ಮಾಡಲಾಗಿದೆಯೇ ? | ನಗರ ಸ್ಥಳಿಯ ಸಂಸ್ಥೆಗಳ ವ್ಯಾಪ್ತಿಯ ರೆವಿನ್ಯೂ ನಿವೇಶನಗಳಲ್ಲಿ ಕಟ್ಟಡ ನಿರ್ಮಿಸಿರುವ ಬಗ್ಗೆ ಪ್ರತ್ಯೇಕವಾಗಿ ಸಮೀಕ್ಷೆ ಮಾಡಿರುವುದಿಲ್ಲ. |

**ಸಂಖ್ಯೆ: ನಅಇ 11 ಎಲ್‌ಸಿಕ್ಯೂ 2020**

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು